## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ | : | 144 |
| ಸದಸ್ಯರ ಹೆಸರು | : | ಶ್ರೀ ಸೂರಜ್ ರೇವಣ್ಣ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 16/02/2022 |
| ಉತ್ತರಿಸುವ ಸಚಿವರು | : | ವಸತಿ ಹಾಗೂ ಮೂಲಸೌಲಭ್ಯ ಅಭಿವೃದ್ಧಿ ಸಚಿವರು. |

<table>
<tr><th>ಕ್ರ. ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>(ಅ)</td><td>ಹಿಂದಿನ ಮೈತ್ರಿ ಸರ್ಕಾರದ ಅವಧಿಯಲ್ಲಿ ಹಾಸನ ವಿಮಾನ ನಿಲ್ದಾಣಕ್ಕೆ ಲೋಕೋಪಯೋಗಿ ಇಲಾಖೆ ವತಿಯಿಂದ ಅಂದಾಜು ಪತ್ರ ತಯಾರಿಸಿರುವುದು ನಿಜವೇ; ಹಾಗಿದ್ದಲ್ಲಿ, ಲೋಕೋಪಯೋಗಿ ಇಲಾಖೆ ವತಿಯಿಂದ ತಯಾರಿಸಿದ ಅಂದಾಜು ಮೊತ್ತವೆಷ್ಟು; ( ಮೊತ್ತದೊಂದಿಗೆ ಸಂಪೂರ್ಣ ಮಾಹಿತಿ ನೀಡುವುದು )</td><td>ಲೋಕೋಪಯೋಗಿ ಇಲಾಖೆಯಿಂದ ಹಾಸನ ವಿಮಾನ ನಿಲ್ದಾಣ ಕಾಮಗಾರಿಗೆ ವಿವರವಾದ ಯೋಜನಾ ವರದಿಯನ್ನು ರೂ. 220.00 ಕೋಟಿ ಮೊತ್ತದಲ್ಲಿ ತಯಾರಿಸಲಾಗಿತ್ತು. ಈ ಅಂದಾಜಿನಲ್ಲಿ ಕೆಳಕಂಡ ವ್ಯವಸ್ಥೆಯನ್ನು ಮಾಡಲಾಗಿತ್ತು.
<table>
<tr><th>ಕ್ರ. ಸಂ</th><th>ಕಾಮಗಾರಿ ವಿವರ</th><th>ಅಂದಾಜು ಮೊತ್ತ ರೂ ಕೋಟಿಗಳಲ್ಲಿ</th></tr>
<tr><td>1</td><td>ಕಾಂಪೌಂಡ್ ಗೋಡೆ, ಅಪ್ರೋಚ್ ರಸ್ತೆ, ಪಾರ್ಕಿಂಗ್, ಲ್ಯಾಂಡ್ ಸ್ಕೇಪ್, ವಾಚ್ ಟವರ್ ಮುಂತಾದವು.</td><td>19.67</td></tr>
<tr><td>2</td><td>ರನ್‌ವೇ, ಏಪ್ರಾನ್, ಟ್ಯಾಕ್ಸಿವೇ, ಫೇರಿಫರಲ್ ರೋಡ್ ಮತ್ತು ಒಳಾವರಣ ರಸ್ತೆಗಳು</td><td>92.85</td></tr>
<tr><td>3</td><td>ಟರ್ಮಿನಲ್ ಕಟ್ಟಡ, ಕಾರ್ಗೋ ಎಟಿಸಿ ಟವರ್, ಹ್ಯಾಂಗರ್, ಅಗ್ನಿಶಾಮಕ ಠಾಣೆ ಮುಂತಾದವು</td><td>94.23</td></tr>
<tr><td>4</td><td>ನೀರು ಸರಬರಾಜು ಮತ್ತು ನೈರ್ಮಲ್ಯೀಕರಣ, ವಿದ್ಯುತ್ ಮತ್ತು ಇತರೆ ಕಾಮಗಾರಿಗಳು</td><td>6.05</td></tr>
<tr><td>5</td><td>ಇತರೆ ವೆಚ್ಚಗಳು (Lump sum Provision)</td><td>7.20</td></tr>
<tr><td></td><td>ಒಟ್ಟು</td><td>220.00</td></tr>
</table></td></tr>
<tr><td>(ಆ)</td><td>2021-22ನೇ ಸಾಲಿನಲ್ಲಿ ಹಾಸನ ವಿಮಾನ ನಿಲ್ದಾಣ ನಿರ್ಮಾಣ ಕಾಮಗಾರಿಯ ಅಂದಾಜು ಮೊತ್ತವೆಷ್ಟು; ಈವರೆಗೂ ಬಿಡುಗಡೆಯಾಗಿರುವ ಅನುದಾನವೆಷ್ಟು; ( ಈ ಕಾಮಗಾರಿಯನ್ನು ನಿರ್ವಹಿಸುತ್ತಿರುವ ಇಲಾಖೆ ಮತ್ತು ಗುತ್ತಿಗೆದಾರರ ಹೆಸರು ವಿಳಾಸದೊಂದಿಗೆ ಸಂಪೂರ್ಣ ಮಾಹಿತಿ ನೀಡುವುದು )</td><td>ಹಾಸನ ವಿಮಾನ ನಿಲ್ದಾಣದ ಕಾಮಗಾರಿಯ ಒಟ್ಟು ಅಂದಾಜು ಮೊತ್ತ ರೂ 193.65 ಕೋಟಿಗಳು. ಈವರೆಗೂ ಯಾವುದೇ ಅನುದಾನ ಬಿಡುಗಡೆಯಾಗಿರುವುದಿಲ್ಲ.<br>ಈ ವಿಮಾನ ನಿಲ್ದಾಣವನ್ನು ಮೂಲಸೌಲಭ್ಯ ಅಭಿವೃದ್ಧಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯು ನಿರ್ವಹಿಸುತ್ತಿದೆ.<br><br>ಶ್ರೀ ಇಬ್ರಾಹಿಂ ಶರೀಫ್, ಪ್ರಥಮ ದರ್ಜೆ ಗುತ್ತಿಗೆದಾರ, ತೀರ್ಥಹಳ್ಳಿ ಇವರನ್ನು ಪ್ಯಾಕೇಜ್ -1 ಕಾಮಗಾರಿಗೆ ಗುತ್ತಿಗೆದಾರರನ್ನಾಗಿ ನೇಮಿಸಿದೆ. ವಿಳಾಸ:- ಶ್ರೀ ಇಬ್ರಾಹಿಂ</td></tr>
</table>

| | | |
|---|---|---|
| | | ಶರೀಫ್, ಪ್ರಥಮ ದರ್ಜೆ ಗುತ್ತಿಗೆದಾರ, ತೀರ್ಥಹಳ್ಳಿ, ಶಿವಮೊಗ್ಗ ಜಿಲ್ಲೆ - 577432 |
| (ಇ) | ಹಾಸನ ವಿಮಾನ ನಿಲ್ದಾಣ ನಿರ್ಮಾಣದ ಮೂಲ ಉದ್ದೇಶ ಹಾಗೂ ಮೂಲ ನಕ್ಷೆಯಂತೆ ಎಲ್ಲಾ ಜಮೀನುಗಳನ್ನು ಸಂಪೂರ್ಣವಾಗಿ ಭೂಸ್ವಾಧೀನಪಡಿಸಿಕೊಂಡು ಹಾಸನ ನಗರದಲ್ಲಿ ವಿಮಾನ ನಿಲ್ದಾಣ, ಗಾಲ್ಫ್ ಕೋರ್ಸ್, ಕಾರ್ಗೋ ಎಂ.ಆರ್.ಒ. ಸೌಲಭ್ಯ ಮತ್ತು ವಾಯುಯಾನ ತರಬೇತಿ, ಸಂಪರ್ಕ ರಸ್ತೆ ಮುಂತಾದ ಮೂಲ ಸೌಲಭ್ಯಗಳುಳ್ಳ ಹಾಸನ ಗ್ರೀನ್ ಫೀಲ್ಡ್ ಏರ್‌ಪೋರ್ಟ್ ಯೋಜನೆಯ ನಿರ್ಮಾಣ ಕಾಮಗಾರಿಯನ್ನು ಕಲಬುರ್ಗಿ, ಶಿವಮೊಗ್ಗ ಮತ್ತು ವಿಜಯಪುರ ಗ್ರೀನ್‌ಫೀಲ್ಡ್ ಏರ್‌ಪೋರ್ಟ್ ಮಾದರಿಯಲ್ಲಿ ಕಾಮಗಾರಿಯನ್ನು ಕೈಗೊಳ್ಳುವ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು; ( ಕಲಬುರ್ಗಿ ಮತ್ತು ಶಿವಮೊಗ್ಗ ವಿಮಾನ ನಿಲ್ದಾಣದ ಅಂದಾಜು ಪತ್ರದ ಸಂಪೂರ್ಣ ಮಾಹಿತಿ ನೀಡುವುದು ) | ಹಾಸನ ವಿಮಾನ ನಿಲ್ದಾಣವನ್ನು ಎಟಿಆರ್-72 ಮಾದರಿ ವಿಮಾನಗಳ ಕಾರ್ಯಾಚರಣೆಗೆ ಅನುವಾಗುವಂತೆ ಅಭಿವೃದ್ಧಿ ಪಡಿಸಲಾಗುತ್ತಿದೆ.<br><br>ಕಲಬುರಗಿ ಮತ್ತು ಶಿವಮೊಗ್ಗ ವಿಮಾನ ನಿಲ್ದಾಣಗಳನ್ನು ಏರ್‌ಬಸ್-320 ಮಾದರಿ ವಿಮಾನಗಳ ಕಾರ್ಯಚರಣೆಗೆ ಹಾಗೂ ವಿಜಯಪುರ ಮತ್ತು ಹಾಸನ ವಿಮಾನ ನಿಲ್ದಾಣಗಳನ್ನು ಎಟಿಆರ್-72 ಮಾದರಿ ವಿಮಾನಗಳ ಕಾರ್ಯಚರಣೆಗೆ ವಿನ್ಯಾಸಿಸಿದ್ದು, ಅದರಂತೆ ವಿಮಾನ ನಿಲ್ದಾಣಗಳ ಮೂಲಸೌಲಭ್ಯಗಳನ್ನು ಅಭಿವೃದ್ಧಿ ಪಡಿಸಲಾಗುತ್ತಿದೆ.<br><br>ವಿಮಾನ ನಿಲ್ದಾಣದ ಹೆಸರು (ವಿಮಾನ ಮಾದರಿ) — ಅನುಮೋದಿತ ಅಂದಾಜು ಮೊತ್ತ ರೂ ಕೋಟಿಗಳಲ್ಲಿ<br>ಕಲಬುರಗಿ (ಏರ್‌ಬಸ್ - 320) — 175.57<br>ಶಿವಮೊಗ್ಗ (ಏರ್‌ಬಸ್ - 320) — 384.00 |
| (ಈ) | ಹಾಸನ ವಿಮಾನ ನಿಲ್ದಾಣದ ಕಾಮಗಾರಿ ಪ್ರಸ್ತುತ ಯಾವ ಹಂತದಲ್ಲಿದೆ; ಯಾವ ಕಾಲಮಿತಿಯಲ್ಲಿ ಹಾಸನ ವಿಮಾನ ನಿಲ್ದಾಣದ ಕಾಮಗಾರಿಯನ್ನು ಪೂರ್ಣಗೊಳಿಸಲಾಗುವುದು? (ಸಂಪೂರ್ಣ ಮಾಹಿತಿ ನೀಡುವುದು) | ಪ್ಯಾಕೇಜ್ -1 ಕಾಮಗಾರಿಗಳಾದ ರನ್ವೇ, ರಸ್ತೆಗಳ ಮಣ್ಣು ಸಮತಟ್ಟು ಮಾಡುವ ಕಾರ್ಯ ಮತ್ತು ಆವರಣ ಗೋಡೆಯ ನಿರ್ಮಾಣ ಕಾಮಗಾರಿಯು ಪ್ರಗತಿಯಲ್ಲಿದೆ.<br><br>ಪ್ಯಾಕೇಜ್-2 ಕಾಮಗಾರಿಯನ್ನು ಶೀಘ್ರದಲ್ಲಿ ಪ್ರಾರಂಭಿಸಲಾಗುವುದು. ಸಂಪೂರ್ಣ ಕಾಮಗಾರಿಗಳನ್ನು 2023-24ನೇ ಸಾಲಿನಲ್ಲಿ ಪೂರ್ಣಗೊಳಿಸಲು ಉದ್ದೇಶಿಸಲಾಗಿದೆ. |

ಸಂಖ್ಯೆ:ಮೂಅಇ 09 ರಾಅವಿ 2022

**(ವಿ. ಸೋಮಣ್ಣ)**
ವಸತಿ ಹಾಗೂ ಮೂಲಸೌಲಭ್ಯ ಅಭಿವೃದ್ಧಿ,
ಸಚಿವರು